ಶ್ರೀ ಪ್ರಾಣೇಶದಾಸವರ್ಯ

ವಿರಚಿತ

# ಶ್ರೀ ಹರಿವಾಯು ಸ್ತುತಿ






( ಕನ್ನಡ ಭಾಷೆ ಹಾಗೂ ಭಾಮಿನೀಷಟ್ಪದಿ ಪದ್ಯರೂಪದಲ್ಲಿ)

ಸಂಪಾದಕರು : ಅರವಿಂದಲೋಚನ

# ಶ್ರೀ ಪ್ರಾಣೇಶದಾಸಾರ್ಯ

# ವಿರಚಿತ

# ಶ್ರೀ ಹರಿವಾಯುಸ್ತುತಿ

ಸಂಪಾದಕರು : ಅರವಿಂದಲೋಚನ

ಗತಶಾಲಿವಾಹನಶಕ ೧೯೪೨ ಚಾಂದ್ರಮಾನ

ಶಾರ್ವರೀನಾಮ ಸಂವತ್ಸರದ

ಹೇಮಂತ ಋತುವಿನಮಾರ್ಗಶೀರ್ಷಮಾಸದ

ಶುಕ್ಲಪಕ್ಷದ ತ್ರಯೋದಶೀಯಂದು ಈ ಗ್ರಂಥವು ಪ್ರಕಟ.

# ನಖಸ್ತುತಿ

**ರಾಗ : ಕಾಂಬೋಧಿ**

ದಿವಿಜ ರಮಣನ ದ್ವೇಷಿ ಜನರೆಂ ।
ಬವನಿ ಭರ ಮಾತಂಗ ಮಾಧೇ ।
ಯವಹ ಕುಂಭಗಳೆಂಬ ಗಿರಿಗಳ ದಾರಣಾಧಿಪಟೂ ।
ಪವಿಗಳನು ಪೋಲ್ವಮರಗಣದಿಂ ।
ಸುವಿದಳಿತ ದುರ್ಧ್ವಾಂತ ಕುಮತಿ ।
ಪ್ರವಿತತಾಂತರದಿಂದ ಭಾವಿತ ನಖ ಶರಣ್ಯೆಮಗೇ ॥ 1 ॥

ಸುಗುಣಗಣ ಸಂಕೋಪಸಂಗತ ।
ದೃಗ್ಗ್ರಥಿತ ಪ್ರಾಂತೋತ್ಥಿತಾಗ್ನಿಯ ।
ಝುಗಝುಗಿಪ ಮಾರ್ತಾಂಡನುಪಮೆಯ ವಿಸ್ಫುಲಿಂಗಗಳಿಂ ।

ಯುಗಯುಗಾಸ್ಯ ಭವೇಂದ್ರ ಸಂದೋ ।

ಹಗಳನ್ನೈದಿಸಿ ಭಸಿತ ಭಾವವ ।

ಬಗೆಬಗೆಯಲಿಂದವನಿಜಯಳನಪ್ಪಿ ರಮಿಸುವನೇ ॥ 2 ॥

ಶುಭನಿಕೇತನ ಸೌಖ್ಯದ ಭವ ।

ನ್ನಿಭರನನ್ಯರಗಾಣೆನಧಿಕ ।

ತ್ರಿಭುವನದಿ ನಾಲ್ಕೆರಡನೇ ರಸದಂತೆ ಸನ್ಮಹಿತಾ ।

ವಿಭು ವಿಭೂತಿದ ಭೂಜಲೇಂದ್ರ ।

ಪ್ರಭೃತಿರಸ ಸಪ್ತೋತ್ತಮನೆ ಯನ ।

ಗಭಯ ಕೊಡು ಪ್ರಹ್ಲಾದನುತ **ಪ್ರಾಣೇಶವಿಟ್ಠಲನೇ**॥ 3 ॥

# ಶ್ರೀ ವಾಯುಸ್ತುತಿ

ಭಾರತೀಶ ಭವೇಂದ್ರನುತ ಸೀ - ।
ತಾರಮಣಗತಿ ಪ್ರೀತ ಹನುಮಾನ್ ।
ಘೋರ ಕೀಚಕಚಯ ಧನಂಜಯ ಸೌಖ್ಯ ಸತ್ತೀರ್ಥಾ ॥ ಪ ॥

ಹರಿಯ ಚರಣ ಸರೋಜನಿಷ್ಠಾ ।
ವರ ಸುಗುಣದಿಂದಧಿಕ ಗುರುತಮ ।
ಚರಣ ಲೋಕತ್ರಯ ಸುಪೂಜಿತ ಶ್ರೀಮದಾನಂದ ।
ವರ ಮುನೀಂದ್ರನೆ ನಿನ್ನ ಚರಣಾಂ ।
ಬುರುಹದಲಿ ಭ್ರಾಜಿಪ ರಜೋಗಣ ।
ಪರಮ ಪಾವಿಸಲಾವ ರಜಗಳು ಭಾರತೀ ವಿನುತ ॥ 1 ॥

ಶ್ರದ್ಧೆಯಿಂದಭಿವೃದ್ಧ ಕಲಕಲ ।

ಶಬ್ಧದಿಂದನುಬದ್ಧ ಸೇವಾ ।

ವೃದ್ಧ ಸಂವಿದ್ವಿಬುಧಗಣದ ಸುಮೌಲಿ ರತ್ನಗಳಾ ।

ಹೃದ್ಯ ಸಂಘಟ್ಟನದಿ ಘರಷಿತ ।

ಶುದ್ಧ ಪಾದುಕ ಜನಿತ ಕನ ।

ಕದ ಸದ್ರಜೋಗಣರಂಜಿತಾಶಾ ಸುರೇಣುಗಳಿಗೆ ನಮೋ ॥2॥

ಜನನ ಮೃತಿ ಮೊದಲಾದ ಬಹುಳಾಂ ।

ಜನಕೆ ವಿರಹವನೀವ ಬಲು ಸ ।

ಜ್ಜನಕೆ ಸುಗುಣಗಳಿತ್ತು ವಿಮಲಾನಂದ ಕರುಣಿಸುವಾ ।

ದಿನದಿನದಿ ದೂಷಿಸುವ ದುರ್ಮತಿ ।

ದನುಜರನು ದುಃಖೋಗ್ರತಮದೊಳ್ ।

ಮುಣುಗಿಸುವ ನಿನ್ನಂಘ್ರಿ ಪಾಂಸುಗಳಾನು ವರಣಿಪೆನೇ ॥ 3 ॥

ಕಲಿಯ ಮಲದಿಂ ಕಲುಷಜನದಲಿ ।

ವಲಿದು ವಿಜ್ಞಾನವನೆ ಕರುಣಿಸೆ ।

ಜಲಜ ಜಾಹ್ನವಿ ಜಡೆ ಬಿಡೌಜಸ ಮುಖ್ಯ ಸುರವಿನುತಾ ।

ಸುಲಭರನು ಸಂರಕ್ಷಿಸುವ ಸ ।

ತ್ಸುಲಲಿತಾಗಮ ಮಹಿತ ಮಧ್ವಾ ।

ಮಲ ಸುರೂಪನೆ ಮರುತ ನಾ ನಿನ್ನೆಂತು ವರಣಿಪೆನೋ ॥ 4 ॥

ಪೊಳೆವ ಮಿಂಚಿನ ಪೋಲ್ವ ಗದೆಯಿಂ ।

ಥಳಥಳಿಪ ದಿನಕರನ ತೇಜದ ।

ಚಲುವ ಭುಜ ಭೂಷಣದಿ ಭೂಷಿತ ಭುಜದಿ ಧರಿಸುತಲೀ ।

ಬೆಳಗಿ ಭುವನಂತರವ ನಿಜರುಚಿ ।

ಗಳಲಿ ಭಾಜಿಪ ಭೀಮರೂಪಾ ।

ನಿಳನೆ ನಿರ್ಮಲಮತಿಯ ಕರುಣಿಪುದಲವಬೋಧಾಖ್ಯಾ ॥ 5 ॥

ಭವಜ ಸಂತಾಪಗಳ ವನಕೆ ।

ಅವಧಿ ಕರುಣಾಕಲಿತನೇ ಹೃದಯಾ ।

ಲವ ಶುಭಸ್ಮಿತ ಪೊರಯುತ ವಿದ್ಯಾಖ್ಯ ಮಣಿಕಿರಣಾ ।

ನಿವಹದಿಂ ದಿಗ್ದಶವ ಬೆಳಗುವ ।

ಭುವನರುಹನಾಭನ ನಿವಾಸದ ।

ಲವಿರಹಿತ ಸುಖತೀರ್ಥಜಲಧಿಯೆ ಶಮಲ ಪರಿಹರಿಸೋ ॥ 6 ॥

ಬಂಧಕಂದಿಪ ಭಜಕಜನಕಾ ।

ನಂದ ಪೊಂದಿಪ ನುಡಿಯ ರಮಣನೆ ।

ಛಂದದಿಂದಾಂಜಲಿಯ ಶಿರದಲಿ ಬಂಧಿಸುವೆ ಭರದೀ ।

ಇಂದಿರಾರಮಣನ ಪದಾಂಬುಜ ।

ಒಂದು ಮನದಲಿ ಭಜಿಪ ಭಕುತಿಯ ।

ಗಂಧವಹ ನಿನ್ನಂಘ್ರಿ ಭಜನೆಯ ಭೂರಿ ಕರುಣಿಪುದೂ ॥ 7 ||

ಘನ ಸರೋರುಹಮಿತ್ರ ಶಶಲಾಂ ।

ಛನ ಸಮೇತಾ ನಭನರಾಧಿಪ ।

ಜನ ವಿಭೂತಿಗಳುಳ್ಳ ವಸುಮತಿ ದಿವಿಜ ಭುವನಗಳಾ ।

ಜನನಭರಣೋದ್ದಳನಗಳ ಕಾ ।

ರಣದ ಸುಭ್ರೂವಿಭ್ರಮವು ಹೆ ।

ದ್ಧನುಜ ಸಂಕರ ಸಲಿಲಜಾದ್ಯರ ಸತತ ಮೋಹಿಪುದೂ ॥ 8 ||

ನಿನ್ನ ಯತಿರೂಪವನು ಪೂಜಿಪ ।

ಧನ್ಯಜನರಾನಂದರೂಪದಿ ।

ರನ್ನ ಸಹಚರಚಲಿತ ಚಾಮರಚಯದಿ ಶೋಭಿಪರೂ ।

ಘನ್ನ ದ್ಯುತಿ ತಾರುಣ್ಯ ಶುಭ ಲಾ ।

ವಣ್ಯ ಲೀಲಾಪೂರ್ಣ ಸತಿಯರ ।

ಚನ್ನ ಕುಚ ಸಂಶ್ಲೇಷ ಜನಿತಾನಂದ ಸಂಭರರೂ ॥ 9 ॥

ಕುಂದಮಂದಾರಾದಿ ಕುಸುಮದ ।

ಗಂಧ ಸಂಗತ ಮರುತ ।

ಸಹಿತಾನಂದ ಜನಕಾನಂದವೀವುದು ವನರುಹಾಕ್ಷಿಯರಾ ।

ವೃಂದ ಸಂಸೇವಿತ ನಿರಂಜನ ।

ಚಂದ್ರ ದಿವಸಾಧೀಶ ಮದನಾ ।

ಹೀಂದ್ರ ಸುರಪತಿ ಸೇವ್ಯಮಹಿತ

ಮುಕುಂದನರಮನೆಯೋಳ್॥10॥

ಧಿಟ್ಟ ಕಟಕಟ ಶಬ್ಧ ಶಬಲೋ ।
ದ್ಭಟ್ಟಜನಿ ಕೆಂಗಿಡಿಗಳಿಂದತಿ ।
ಜುಷ್ಟ ಪಂಕಿಲ ಜರಿವ ಸುಖಬಿಂದುವಿನ ತಮದೊಳಗೆ ।
ಸ್ಪಷ್ಟವಾದಿತರಾದ ಭವದ ನ ।
ಭೀಷ್ಟರನು ಸಂತಪ್ತ ಶಿಲೆಗಳ ।
ಲಿಟ್ಟು ಕುಂದಿಪರನವರತ ತ್ವದ್ಭೃತ್ಯ ಜನರುಗಳು ॥ 11 ॥

ಶ್ರೀನಿವಾಸನ ಸರಸ ಚರಣ ।
ಧ್ಯಾನ ಮಂಗಳಮಹಿತ ಭವದಸ ।
ಮಾನ ಸನ್ನಿಧಿ ಪಿಡಿದು ಸುಮುದಾಸೀನ ಮಾನವನೂ ।
ಜ್ಞಾನಿಗೋಚರ ರಹಿತ ದುಃಖಾ ।
ಧೀನ ಸುಖ ಸಂಸಾರದೊಳು ಬಲು ।
ದೂನನಾಗಿಹ ನಿತ್ಯ ನಿರಯವ ನೋಡನೆಂದೆಂದೂ ॥ 12 ॥

ಕ್ಷುದಧಿಕಾರ್ದಿತ ರಾಕ್ಷಸರ ಖರ ।
ರದನ ನಖಕ್ಷೋಭಿತಾಕ್ಷ ।
ಮದಕ್ಷುರಾನನ ಪಕ್ಷಿವೀಕ್ಷಿತಗಾತ್ರ ಸಹಿತರನೂ ।

ರುದಿರ ಪೂಯಾ ಕುಲಿತ ನಾನಾ ।
ವಿಧದ ಕ್ರಿಮಿಕುಲ ಕಲಿಲತಮದೊಳ ।
ಗಧಿ ನಿಮಗ್ನರ ಬಾಧಿಪವು ಪವಿ ಕಲ್ಪ ಕುಜಲೂಕಾ ॥ 13 ॥

ಜನನಿ ಜನಕಾಗ್ರಜ ಹಿತಪ್ರದ ।
ಪ್ರಣಯಭರ ಸರ್ವಾಂತರಾತ್ಮನೆ ।
ಜನನಮರಣಾದಿಗಳ ಜರಿಸುವ ಮರುತ ಜಾಹ್ನವಿಯಾ ।
ಜನಕ ಹರಿಯ ಅಪೂರ್ವ ನಿನ್ನಯ ।
ವನಜ ಚರಣದಿ ವಿಮಲ ಭಕುತಿಯು ।
ದಿನದಿನದಿ ಯನಗಧಿಕ ಕರುಣಿಪುದಮಿತ ಸದ್ಬೋಧಾ ॥ 14 ॥

ಸಕಲ ಸದ್ಗುಣಗಣಗಳಿಂದಾ ।
ಧಿಕ ರಮಾ ಸಂಶ್ಲೇಷಿ ಹರಿಪಾ ।
ದ ಕಮಲದಿ ತದ್ಭಕ್ತ ತಾಮರಸೋದ್ಭವ ಸಮೀರಾ ।
ಮಖ ಶತಾಮುಖ ತಾರತಮ್ಯವ ।
ಯುಕುತಿಯಲಿ ತಾ ತಿಳಿದು ನಿರ್ಮಲ ।
ಭಕುತಿ ಭಾರವ ವಹಿಸುವನ ನಮ್ಮನಿಲ ನೀ ಪೊರೆವೇ ॥ 15 ॥

ತತ್ತ್ವ ಸುಜ್ಞಾನಿಗಳ ನಿರ್ಮಲ ।
ಮುಕ್ತಿಯೋಗ್ಯ ಮಹಾನುಭಾವರ ।
ಸತ್ಯ ಸುಖಕ್ಕೈದಿಸುವೆ ಮಿಶ್ರಜ್ಞಾನ ಜನರುಗಳಾ ।
ಸುತ್ತಿಸುವೆ ಸಂಸಾರದದಲಿ ಬಲು ।
ವತ್ತಿಸುವೆ ಮಿಥ್ಯಾಮನೀಷರ ।
ನಿತ್ಯ ನಿರಯದಲೆಂದು ಕೇಳುವೆ ನಾನು ನಿಗಮಗಳಾ ॥ 16 ॥

ಮಹಿತ ಪೌರುಷ ಬಾಹುಶಾಲಿ ವಿ ।
ರಹಿತ ಸರ್ವಾಘೌಘ ನಿರ್ಮಲ ।
ಸಹಿತ ಬಹುಲ ಬ್ರಹ್ಮಚರ್ಯ ಪ್ರಮುಖ ಧರ್ಮಗಳಾ ।
ಬಹು ಸಹೋಮಯ ಭಜಕ ರಹಿತವ ।
ದಹಿಸುವ ಪ್ರತಿದಿನದಿ ಮೋಹಕ ।
ಮಹಮಹಿಮ ಹನುಮಂತದೇವರ ರೂಪಕಾನಮಿಪೇ ॥ 17 ॥

ಶತ ಮನೀಷನೆ ಶಮದ ಪಂಚಾ ।

ಶತ ಸಹಸ್ರ ಸುಯೋಜನಗಳಿಂ ।

ದತಿ ವಿದೂರ ಮಹೌಷಧಿಗಳುಳ್ಳಾ ಗಿರೀಂದ್ರವನೂ ।

ಪ್ರಥಿತ ನೀ ತರಲಾಗ ಗಮಿಸೀ ।

ಕ್ಷಿತಿ ಧರೇಂದ್ರನ ಕಿತ್ತು ತಂದಾ ।

ಪ್ರತಿಮ ನಿನ್ನನು ನೋಡ್ದರಾ ಜನರೊಂದು ಕ್ಷಣದೊಳಗೇ ॥18॥

ಘನಗುಣಾಂಭೋನಿಧಿಯೆ ಶತಯೋ ।

ಜನ ಸಮುನ್ನತ ವಿಸ್ತೃತಾಚಲ ।

ವನು ಅನಾದರದಿಂದಲೊಗೆಯಲು ಲೀಲೆ ಮಾತ್ರದಲೀ ।

ಅನುಸರಿಸಿ ಸ್ವಸ್ವ ಸ್ಥಳಗಳತಿ ।

ಘನ ಸುಶಕಲ ಸಮೇತ ಸುಶಿಲಾ ।

ಗಣಗಳುಳ್ಳದ್ದೆನಿಸೆ ನಿನ್ನಯ ಕೌಶಲಕೆ ನಮಿಪೇ ॥ 19 ॥

ನಿನ್ನ ಮುಷ್ಟಿಯಲಿಂದ ಪೇಷಿತ ।
ಸ್ವರ್ಣಮಯವರ್ಮ ವಿಭೂಷಿತ ।
ಚೂರ್ಣಿತಾಸ್ಥಿಗಳುಳ್ಳ ರಾವಣನುರವ ನೋಡುವರೂ ।
ಸ್ವರ್ಣಗಿರಿ ಸುತಟಾಕ ಶಂಕಾ ।
ಪೂರ್ಣರಾಗುವರಾ ಸುಮುಷ್ಟಿಯು ।
ಬನ್ನ ಕಳೆದು ಬಹೂನ್ನತಾನಂದಗಳ ಕೊಡದೇನೋ ॥ 20 ||

ಜಾನಕಿ ಮುದ್ರಾದಿ ದಾನವು ।
ದಾನವರ ದಹನಾದಿ ಸೇನಾ ।
ಶ್ರೇಣಿಗತಿ ಸುಪ್ರೀತ ಕರುಣಾಶಾಲಿ ಸುಖಮಾಲೀ ।
ಭಾನುಕುಲ ಸುಲಲಾಮ ಪ್ರೇಮಾ ।
ಧೀನ ಮಾನಸನಾಗಿ ವನರುಹ ।
ಸೂನುವಿನ ಶುಭಪದವನಿತ್ತನು ನಿನಗೆ ನಳಿನಾಕ್ಷಾ॥ 21 ||

ಮದ ಬಕನ ಸಂಹರಿಸಿ ಅತಿ ವೇ ।
ಗದಿ ಪುರಸ್ಥಿತ ಸರ್ವ ಜನದ ಸು ।
ವಿಧೃತಿ ಸುಖ ವಿಘ್ನಗಳ ಭರದಲಿ ಬಿಡಿಸಿ ಕಾಯ್ದಿದೆಯೋ ।

ಅಧಮತರ ದುರ್ಧಿಷಣ ದುರುಳರಿ ।
ಗಧಿಕ ಕಿರ್ಮೀರರನ ರಣಾಂಗದಿ ।
ಸದೆದ ಸತ್ಕೌರವ ಕುಲೇಂದ್ರನೆ ನಮಿಪೆನನವರತಾ ॥ 22 ॥

ಅತ್ಯ ಯತ್ನದಲಿಂದ ಕುಜರಾ ।
ಪತ್ಯನಂಗಾಸ್ಥಿಗಳ ಸಂಧಿಗ ।
ಳೊತ್ತಿ ನಿರ್ಮಥಿಸಲು ಸುರಾರಿ ಜನೋತ್ತಮೋತ್ತಮನಾ ।
ಅರ್ಥಿಯಲಿ ಸಂಹರಿಸೆ ಹರಿ ತಾ ।
ತೃಪ್ತನಾದನು ಎಂತೋ ಆ ಪರಿ ।
ತೃಪ್ತನಾದನೆ ಪೇಳು ರಾಜಸೂಯಾಶ್ವಮೇಧದಲೀ ॥ 23 ॥

ಸಿಂಹನಾದದಲಿಂದ ಪೂರಿತ ।
ಬಹ್ವನೀಕಕ್ಷಪಣ ನಿಪುಣಾ ।
ರಂಹಸದ ತ್ವದ್ರಣವ ವರ್ಣಿಪರಿನ್ನುಂಟೇ ।
ಸಿಂಹ ಸಂಹನನಾಂಗ ಕಮಲಾ ।
ಸಿಂಹನಲ್ಲದೆ ಸತತ ಸುವಿ ।
ರಹಿತಾಂಹಸನೆ ನಿಮ್ಮಂಘ್ರಿ ಕಮಲಕ್ಕೆರಗಿ ವಂದಿಪೆನೋ ॥ 24 ॥

ಜ್ಞಾನಧನದಾನಿಲನೆ ನಿನ್ನಯ ।
ರಾಣಿ ವಾಣಿಯು ಯೆನ್ನ ಮನದ - ।
ಜ್ಞಾನ ಕಳೆದು ವಿಶಾಲ ಭಕುತಿಯ ಹರಿಯ ಮಹಿಮೆಗಳ ।
ಜ್ಞಾನವನು ಕರುಣಿಸುತಲನುದಿನ ।
ಹೀನ ದುರಿತೌಘಗಳ ವಿರಹಿಸ - ।
ಲಾ ನರೇಂದ್ರನ ಕುವರಿ ನಿನ್ನಾಜ್ಞೆಯ ಕರುಣದಲೀ ॥ 25 ॥

ಭೇದ ವಿರಹಿತ ಬಹು ಚಿದಾನಂ - ।
ದಾದಿ ಗುಣ ಸಂಪೂರ್ಣರೆನಿಸಿದ ।
ಭೇದವಚನಕೆ ಗೋಚರಿಸಿದ ವಿಶೇಷ ಬಲದಿಂದಾ ।
ಮೋದದಲಿ ದ್ವಿಜಬಾಹುಜೋದಿತ ।
ರಾದ ವೇದವ್ಯಾಸಕೃಷ್ಣರ ।
ಪಾದ ಪಂಕಜ ನಿರುತ ನಿನ್ನಯ ಚರಣಕಾನಮಿಪೇ ॥ 26 ॥

ನಂದದಲಿ ಸೌಗಂಧಿಕವ ತರ ।
ಲಂದು ಪೋಗಲು ಭೀಮರೂಪದ ।
ಲಂದದಿಂದಾಂಜನೆಯ ಕುವರನ ಬಾಲ ಧರಿಸದಲೇ ।
ಕುಂದಿದಂದದಿ ತೋರಿಸಿದೆ ಆ ।
ನಂದತೀರಥ ದನುಜಮೋಹನ ।
ನಂದಸಾಂದ್ರನೆ ನಿನ್ನ ಚರಿತೆಯು ಲೀಲೆ ಕೇವಲವೋ ॥ 27 ॥

ಕುಟಿಲ ಕಟುಮತಿ ಕಟುಕ ದೈತ್ಯರ ।
ಕಠಿಣತರ ಗದೆಯಿಂದ ಕುಂದಿಸಿ ।
ನಿಟಿಲನೇತ್ರನ ನುಡಿಗಳಿಂದಾಜೇಯ ಮಾಯಿಗಳಾ ।
ದಿಟನೆ ವಾಗ್ಬಾಣಗಳ ನಿಚಯದಿ ।
ಶಠರ ವಿಶ್ವಾತಥದ ವಚನರ ।
ತ್ರುಟಿಯು ಮೀರದೆ ತರಿದು ತರುಣಿಗೆ ಕುಸುಮ ನೀನಿತ್ತೇ ॥28॥

ಯುಗಪದದಿ ಸಂಹೃತ ಮಹಾಸುರ ।
ರಿಗೆ ಮಿಗಿಲು ಮಣಿಮಂತ ತಾನತಿ ।
ಮಿಗಿಲು ಕೋಪದ ವಶಗನಾಗಿ ಮಹೌಜಸನೇ ನಿನ್ನಾ ।
ಬಗೆಯ ಜನರಾಂತರಕೆ ಮೋಹವ ।
ಬಗೆವ ಬಹುಗುಣಪೂರ್ಣ ಹರಿಗೆ ।
ವಿಗುಣ ಜೀವೈಕ್ಯವನು ಪೇಳುವ ಕುಮತ ರಚಿಸಿದನೂ ॥ 29॥

ಅವನ ದುರ್ಧಿಷಣಾನುಸಾರದಿ ।
ಪವನಪಿತಗೆ ಜೀವೈಕ್ಯವನು ಪೇ ।
ಳುವ ಕುವಾದವ ಕೆಲರು ಸಲಿಸಲು ಕೆಲರನಾದರಿಸೇ ।
ಪವನ ನೀನವತರಿಸಿ ವೇಗದ ।
ಲವನಿಯೊಳಗಾ ಕುಮತಿ ದುಯ್ಯ್ರ್ಯ ।
ಕ್ಯವನಿರುಹಗಳ ದಹಿಸಿದ್ಯಪ್ರತಿ ದಾವ ಸಮನಾಗೀ ॥ 30 ॥

ಅಮಿತಮಹಿಮನೆ ನಿನ್ನ ವಾಖ್ಯಾ ।
ವಿಮಲ ಪಂಚಾನನ ನಿನಾದವ ।
ಭ್ರಮಿಸಿ ಕೇಳುತ ಭಯದಿ ವದರಿ ನಿರಾಶೆಯಲಿ ಜರಿದು ।

ಶಮಿತ ದರ್ಪಾಕೋಪರಾಗಿ ।
ಭ್ರಮದಿ ಸಂತತರೆನಿಸಿ ದಶದಿಶೆ ।
ಗಮಿಸಿ ಪೋದರು ಮಾಯಿ ಗೋಮಾಯಿಗಳು
ಘಳಿಗೆಯೊಳೂ॥31||

ಜಯ ಸುಶೀಲ ಸುಪೂರ್ಣ ಶಕ್ತಿಯೆ ।
ಜಯ ಗುರೋ ಜನ್ಮತ್ರಯದಲಾ ।
ಮಯ ವಿದೂರನೇ ಮಾಯಿಜನರು ವಿಹಿಂಸೆಗೊಳಿಸಿದರೂ ।
ಭಯ ವಿಧುರ ನಿರ್ಮಲ ಚಿದಾನಂದ ।
ಮಯನೆ ಸುಖಸಂದಾಯಿ ನೇತ್ರ ।
ತ್ರಯ ಮುಖರಿಗಧಿಪತಿಯೆ ಮಮ ಸುಖವೀವುದಾಚಾರ್ಯ॥32॥

ಉದಯಿಸುವ ಮಂದಸ್ಮಿತದ ಮೃದು ।
ಮಧುರ ಸಲ್ಲಾಪಾಖ್ಯ ಸುಧೆಯ ।
ತ್ಯಧಿಕ ಧಾರಾಸೇಕದಿಂ ಸಂಶಾಂತ ಭವಶೋಕಾ ।
ಸದಮಲರ ಮನೋನಯನದಿಂ ಸಂ ।
ಮುದದಿ ಸೇವಿತವಾದ ನಿನ್ನಯ ।

ವದನಚಂದ್ರವನೆಂದು ನಾ ನಿತ್ಯದಲಿ ನೋಡುವೆನೋ ॥ 33 ॥

ಮೋದತೀರ್ಥನೆ ನಿನ್ನ ವಚನಾ ।
ಸ್ವಾದಿಸುವ ಬಹು ಸುಕೃತಿ ಜನರಾ ।
ಗಾಧ ಅಪೇಕ್ಷಗಳ ಹರಸುತ ಮೋದವೀಯುತಲೀ ।
ಸಾದರದಿ ಶೋಭಿಸುವ ನಿನ್ನಯ ।
ವೇದ ವ್ಯಾಖ್ಯಾನವನು ಸಂತತ ।
ಬೋಧಪೂರ್ಣನೆ ಎಮ್ಮ ಶ್ರವಣಕೆ ಗೋಚರಿಸಿ ಸಲಹೋ॥34॥

ರತುನಮಯ ಪೀಠದಲಿ ಕುಳಿತಿಹ ।
ಶತಮನೀಷನೆ ಭಾವಿ ವಾಣೀ ।
ಪತಿಯೆ ನಿನ್ನನು ವೈದಿಕಾದಿಸು ವಿದ್ಯದಭಿಮಾನೀ ।
ಕ್ರತುಭುಜರು ಸೇವಿಪರು ಸತತದಿ ।
ವಿತತ ನಿನ್ನಯ ಚರಿತೆಯನು ದೇ ।
ವತೆ ಸಮಾಜದಿ ಗಂಧರ್ವರು ಪೊಗಳುತಿಹರದಕೇ॥35॥

ಜನ್ಮ ಮೃತಿ ನಿರಯಾದಿ ಭಯ ಭೀ ।
ಷಣ ಕುಸಂಸಾರಾಂಬುನಿಧಿಯೊಳ್ ।
ಮುಣುಗಿದಮಲ ಸುಯೋಗ್ಯ ಜನರನು ನೋಡಿ ಕರುಣದಲೀ ।
ಅನಿಲ ಪ್ರಾರ್ಥಿತನಾಗಿ ನಿನ್ನಿಂ ।
ದನುನಯದಿ ಮಾರಮಣ ಮನ್ನಿಸಿ ।
ಜನಿಸಿದನು ಋಷಿಯಿಂದ ವಾಸವಿಯುದದೊಳಗಮಲಾ ॥ 36 ॥

ಅಧಮ ಜನರಿಂದತಿ ತಿರೋಹಿತ ।
ಸದಮಲಾಗಮ ತತಿಗೆ ಕರುಣದಿ ।
ಬುಧರಿಗಾ ಮುದವಾಹ ತೆರದಲಿ ಸೂತ್ರ ರಚಿಸಿದನೂ ।
ಅದುಭುತಾತ್ಮ ಮಹಾನುಭಾವನಿ ।
ಗೆದುರು ಮಿಗಿಲೋಬ್ಬುಂಟೇ ಲೋಕದಿ ।
ಬದರಿಕಾಶ್ರಮನಿಲಯ ವೇದವ್ಯಾಸಗಾನಮಿಪೇ ॥ 37 ॥

ಶ್ರೀಶನಾಜ್ಞೆಯ ಧರಿಸಿ ಶಿರದಲಿ ।
ಈಶ ಗರುಡ ಶಚೀಶಮುಖರ ದಿ ।
ವೀಶ ಪ್ರಾರ್ಥನೆ ಮನಕೆ ತಂದು ಮಹಾಮಹಿಮ ದೇವಾ ।
ಪೋಷಿಸಲು ಸಜ್ಜನರಿಗತಿ ತ್ವರ ।
ಕಾಶ್ಯಪಿಯೊಳಗವತರಿಸಿ ನೀ ಸ ।
ದ್ಭಾಷ್ಯ ವಿರಚಿಸಿ ಖಂಡಿಸಿದಿ ದುರ್ಭಾಷ್ಯಗಳನೆಲ್ಲಾ ॥ 38 ॥

ರಜತಪೀಠಾಹ್ವಯ ಪುರದಿ ನೀ ।
ರಜಭವನೆ ನಡುಸದನ ನಾಮಕ ।
ದ್ವಿಜನ ಗೃಹದಲಿ ಜನಿಸಿ ಮಹಮಹಿಮೆಗಳ ತೋರುತಲೀ ।
ನಿಜ ತುರಿಯ ಆಶ್ರಮವ ಧರಿಸೀ ।
ಪ್ರಜರುಗಳನುದ್ಧರಿಸಲುಪನಿಷ ।
ದ್ವ್ರಜ ಸುಭಾರತ ಭಾಷ್ಯಗಳ ರಚಿಸಿದೆಯೋ ಕರುಣಾಳೂ ॥39॥

ವಂದಿಸುವೆ ಸುರವೃಂದವಂದ್ಯನೆ ।
ವಂದಿಸುವೆ ಜಾಹ್ನವಿಯ ಸ್ನಾನದ ।
ಕಿಂತಧಿಕ ಪುಣ್ಯವನು ಚರಣ ಸ್ಪರುಶ ಮಾಳ್ಪರಿಗೇ ।

ಪೊಂದಿಸುವವನಿಗೆ ವಂದಿಸುವೆ ಭವ ।
ಬಂಧ ಹರಿಸುತ ಸುಖವ ಕೊಡುವಾ ।
ನಂದತೀರಥ ನಿನಗೆ ಅಭಿವಂದಿಸುವೆನನವರತಾ ॥ 40 ॥

ಶ್ರೀಶಮರುತರ ದಾಸ ಗುಹಸುತ ।
ಕೇಶವ ಶ್ರೀ ಭಾರತೀಶರ ।
ನೀ ಸುಪದ್ಯಗಳಿಂದ ಸ್ತುತಿಸಿದ ತಾ ಸುಭಕುತಿಯಲೀ ।
ತೋಷದಿಂ ಪಠಿಸುತ್ತ ನಮಿಸುವ ।
ರಾಶೆಗಳ ಪೂರ್ರೈಸುತೀರ್ವರು ।
ಕ್ಲೇಶರಹಿತ ಸ್ಥಾನವಿತ್ತು ಸುಸೌಖ್ಯನುಣಿಸುವರು ॥ 41 ॥

**||ಶ್ರೀ ಕೃಷ್ಣಾರ್ಪಣಮಸ್ತು||**

**||ಶ್ರೀ ಮಧ್ವೇಶಾರ್ಪಣಮಸ್ತು||**